KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೦, ೨೦೦೭ (ಭಾದ್ರಪದ ೨೯, ಶಕ ವರ್ಷ ೧೯೨೯) | ಸಂಚಿಕೆ ೩೮ |
|---|---|---|

## ಭಾಗ–೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕ ರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:**
1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–11/ಸಿಆರ್–5/2005 ಮೈಸೂರು ದಿನಾಂಕ: 23.5.2007.
2) ತನಿಖಾಧಿಕಾರಿ ವರದಿ ಸಂಖ್ಯೆ: ಕಲೋ/ಪೂವಿ/ಮೈ.ಪಿ.ಎಸ್/05/05, ದಿನಾಂಕ: 22.8.2006.
3) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಶ್ರೀ ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು ಇವರ ವಿರುದ್ಧ ಮೊಕದ್ದಮೆ ಸಂಖ್ಯೆ: 05/2005 ರಲ್ಲಿ ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮೈಸೂರು ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಮಾನ್ಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1) ರಲ್ಲಿ ಓದಲಾದ ತಮ್ಮ ಪತ್ರ ದಿನಾಂಕ: 23.5.2007 ರೊಡನೆ ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೇ ಕಲಂ ಅಡಿಯಲ್ಲಿ ಮಂಜೂರಾತಿಗಾಗಿ ಪ್ರಾಧಿಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1) ರಲ್ಲಿ ಓದಲಾದ ಪತ್ರದ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಬಷೀರ್ ಅಹಮದ್ ಖಾನ್, ಎ.ಸಿ.ಪಿ, ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ), ಆಡಗೋಡಿ, ಬೆಂಗಳೂರು ರವರ ಫಿರ್ಯಾದಿ ದಿನಾಂಕ: 10.08.2005.
2) ಪ್ರಥಮ ವರ್ತಮಾನ ವರದಿ ಮೈಸೂರು ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 05/2005.
3) ಪ್ರಾಯೋಗಿಕ ಪಂಚನಾಮೆ ದಿನಾಂಕ: 10.08.2005.
4) ಟ್ರ್ಯಾಪ್ ಮಹಜರ್ ದಿನಾಂಕ: 10.08.2005.

5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಸಿಎಂಇ/ಇಎಕ್ಸ್.ನಂ.ಎಲ್‌ಒಕೆ/417/05–06, ದಿನಾಂಕ: 20.10.2005.
6) ಕೃತ್ಯ ನಡೆದ ಸ್ಥಳದ ನಕಾಶೆ
7) ಸಾಕ್ಷಿಗಳ ಹೇಳಿಕೆಗಳು: (1) ಶ್ರೀ ಬಷೀರ್ ಅಹ್ಮದ್ ಖಾನ್ @ ಬಿ.ಎ.ಖಾನ್ ಬಿನ್ ಹೈದರ್ ಖಾನ್ (2) ಶ್ರೀ ರಾಜೇಂದ್ರ ಪ್ರಸಾದ್ ಬಿನ್ ಪಿ.ಪಾಪಯ್ಯ (3) ಶ್ರೀ ಕೆ.ರಮೇಶ್ ಬಿನ್ ಎಂ.ಎನ್.ಕೃಷ್ಣರಾವ್ (4) ಶ್ರೀ ನಂಜುಂಡಸ್ವಾಮಿ (5) ಶ್ರೀ ವಿ.ವಿ.ಸಣ್ಣಪ್ಪ (6) ಶ್ರೀ ವಿ.ಮುರಳೀಧರ (7) ಶ್ರೀ ಕೃಷ್ಣಮೂರ್ತಿ (8) ಶ್ರೀ ವಿ.ನಾಗೇಂದ್ರ ಮತ್ತು (9) ಶ್ರೀ ಟಿ.ಎಸ್.ಜಬೀವುಲ್ಲಾ ಬೇಗ್.
8) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳು, ಮಾನ್ಯ 3ನೇ ಅಡಿಷನಲ್ ಸಿ.ಜೆ.ಎಂ. ಕೋರ್ಟ್, ಮೈಸೂರು ಇಲ್ಲಿ ಸಿ.ಸಿ.ನಂ.336/2000ರ ರೀತ್ಯಾ ವಿಚಾರಣೆ ನಡೆಯುತ್ತಿದ್ದು, ಈ ವಿಚಾರಣೆ ವಿರುದ್ಧ ಪಿರ್ಯಾಧಿಯವರು ಗೌರವಾನ್ವಿತ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಪಿಟಿಷನ್ ಸಲ್ಲಿಸಿದ್ದು, ಗೌರವಾನ್ವಿತ ಉಚ್ಚ ನ್ಯಾಯಾಲಯವು ಕ್ರಿಮಿನಲ್ ಪಿಟಿಷನ್ ಸಂಖ್ಯೆ: 3244/2003 ರಲ್ಲಿ ದಿನಾಂಕ: 07.10.2003 ರಂದು ಆದೇಶವನ್ನು ನೀಡಿ ಟ್ರಯಲ್ ಕೋರ್ಟಿಗೆ ಇನ್ನೂ 6 ತಿಂಗಳೊಳಗಾಗಿ ವಿಚಾರಣೆ ಮುಕ್ತಾಯ ಮಾಡಲು ನಿರ್ದೇಶನ ನೀಡಿರುತ್ತದೆ. ಈ ಸಂಬಂಧವಾಗಿ ಪಿರ್ಯಾಧಿಯವರು ದಿನಾಂಕ: 09.08.2005 ರಂದು ನ್ಯಾಯಾಲಯಕ್ಕೆ ವಿಚಾರಣೆ ಸಂಬಂಧ ಹಾಜರಾದಾಗ ಆರೋಪಿತ ಸಹಾಯಕ ಸರ್ಕಾರಿ ಅಭಿಯೋಜಕರು ಪಿರ್ಯಾಧಿ ರವರನ್ನು ಭೇಟಿ ಮಾಡಿ ರಾಜ್ಯ ಉಚ್ಚ ನ್ಯಾಯಾಲಯದ ಸೂಚನೆಯಂತೆ ಇನ್ನು 6 ತಿಂಗಳೊಳಗಾಗಿ ಪ್ರಕರಣ ವಿಚಾರಣೆ ಮುಕ್ತಾಯ ಮಾಡಲು ಫಿರ್ಯಾಧಿದಾರರಿಂದ ರೂ.5,000/– ಲಂಚವನ್ನು ನೀಡುವಂತೆ ಆರೋಪಿತ ಅಧಿಕಾರಿಯವರು ಒತ್ತಾಯಿಸಿರುತ್ತಾರೆ.

ತನಿಖಾಧಿಕಾರಿಗಳಾದ ಶ್ರೀ ಚಂದ್ರಕಾಂತ್, ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮೈಸೂರು ಇವರು ಶ್ರೀ ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ಮೈಸೂರು ಪೊಲೀಸ್ ಠಾಣೆ ಇಲ್ಲಿ ಮೊಕದ್ದಮೆ ಸಂಖ್ಯೆ: 05/2005 ರಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು ಫಿರ್ಯಾದಿಯಾದ ಶ್ರೀ ಬಷೀರ್ ಅಹಮದ್ ಖಾನ್, ಎ.ಸಿ.ಪಿ., ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ) ಆಡಗೋಡಿ, ಬೆಂಗಳೂರು ಇವರ ಮೈಸೂರು ಮಾನ್ಯ 3ನೇ ಅಡಿಷನಲ್ ಸಿ.ಜೆ.ಎಂ. ನ್ಯಾಯಾಲಯ ಇಲ್ಲಿ ಸಿ.ಸಿ. ನಂ.336/2000ನೇ ಕಟ್ಲೆಯಲ್ಲಿಯೂ ಫಿರ್ಯಾದುದಾರರಾಗಿದ್ದು, ಸದರಿ ಪ್ರಕರಣವು ವಿಚಾರಣೆ ನಡೆಯುತ್ತಿದ್ದು, ಈ ವಿಚಾರಣೆ ವಿರುದ್ಧ ಪಿರ್ಯಾಧಿಯವರು ಗೌರವಾನ್ವಿತ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಪಿಟಿಷನ್ ಸಲ್ಲಿಸಿದ್ದು, ಗೌರವಾನ್ವಿತ ಉಚ್ಚ ನ್ಯಾಯಾಲಯವು ಕ್ರಿಮಿನಲ್ ಪಿಟಿಷನ್ ಸಂಖ್ಯೆ: 3244/2003 ರಲ್ಲಿ ದಿನಾಂಕ: 07.10.2003 ರಂದು ಆದೇಶವನ್ನು ನೀಡಿ ಟ್ರಯಲ್ ಕೋರ್ಟಿಗೆ ಇನ್ನೂ 6 ತಿಂಗಳೊಳಗಾಗಿ ವಿಚಾರಣೆ ಮುಕ್ತಾಯ ಮಾಡಲು ನಿರ್ದೇಶನ ನೀಡಿರುತ್ತದೆ. ಈ ಸಂಬಂಧವಾಗಿ ಪಿರ್ಯಾಧಿಯವರು ದಿನಾಂಕ: 09.08.2005 ರಂದು ನ್ಯಾಯಾಲಯಕ್ಕೆ ವಿಚಾರಣೆ ಸಂಬಂಧ ಹಾಜರಾದಾಗ ಆರೋಪಿತ ಸಹಾಯಕ ಸರ್ಕಾರಿ ಅಭಿಯೋಜಕರು ಪಿರ್ಯಾಧಿ ರವರನ್ನು ಭೇಟಿ ಮಾಡಿ ರಾಜ್ಯ ಉಚ್ಚ ನ್ಯಾಯಾಲಯದ ಸೂಚನೆಯಂತೆ ಇನ್ನು 6 ತಿಂಗಳೊಳಗಾಗಿ ಪ್ರಕರಣ ವಿಚಾರಣೆ ಮುಕ್ತಾಯ ಮಾಡಲು ಫಿರ್ಯಾಧಿದಾರರಿಂದ ರೂ.5,000/– ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದಿನಾಂಕ: 10.08.2005 ರಂದು ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲ ಔಚಿತ್ಯಪೂರ್ಣ ಕಾರ್ಯಕ್ರಮವನ್ನು ನೆರವೇರಿಸಿದ ನಂತರ ದಿನಾಂಕ: 10.08.2005 ರಂದು ಮೈಸೂರಿನ ಜಿಎಲ್‌ಬಿ ರಸ್ತೆ, ಮಯೂರು ಯಾತ್ರಿ ನಿವಾಸ್ ಹೋಟೇಲ್‌ನ ರೂ. ನಂ.4 ರಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಕೆ.ಎಸ್.ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು ಅಕ್ರಮ ಸಂಭಾವನೆಯಾದ ರೂ.5,000/– ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ಅಧಿಕಾರಿಯ ಬಲಗೈಯನ್ನು ಸೋಡಿಯಂ ಕಾರ್ಬೊನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಹಾಗೂ ವಸ್ತುಗಳನ್ನು ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ಅಧಿಕಾರಿ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.5,000/– ಗಳನ್ನು ಶ್ರೀ ಕೆ.ಎಸ್.ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರಿಂದ ಮೈಸೂರಿನ ಜಿಎಲ್‌ಬಿ ರಸ್ತೆ ಮಯೂರು ಯಾತ್ರಿ ನಿವಾಸ್ ಹೋಟೇಲ್‌ನ ರೂಂ.ನಂ.4 ರಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾಧಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(ಸಿ)ರ ಅಡಿ ಆಪಾಧಿತ ಸರ್ಕಾರಿ ಅಧಿಕಾರಿ ಶ್ರೀ ಕೆ.ಎಸ್.ರವೀಂದ್ರಗೌಡ ಸಹಾಯಕ ಸರ್ಕಾರಿ ಅಭಿಯೋಜಕ ರವರನ್ನು ಕಲಂ 7 ಮತ್ತು 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 791 ಪಿಪಿಇ 2005, ಬೆಂಗಳೂರು, ದಿನಾಂಕ: 23ನೇ ಜೂನ್ 2007**

ಲಂಚ ನಿರೋಧ ಕಾಯಿದೆ 1988ರ ಕಲಂ 19(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ಕೆ.ಎಸ್.ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕೊಳ್ಳೇಗಾಲ (ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಸಿಜೆಎಂ ನ್ಯಾಯಾಲಯ, ಮೈಸೂರು) ಇವರ ವಿರುದ್ಧ ಕಲಂ 7, ಅಭಿಯೋಜಕರು, 3ನೇ ಸಿಜೆಎಂ ನ್ಯಾಯಾಲಯ, ಮೈಸೂರು) ಇವರ ವಿರುದ್ಧ ಕಲಂ 7, 13(1)(ಡಿ) ಜೊತೆಗೆ ಓದಲಾದ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ 1977ರ ನಿಯಮ 19(1) ರನ್ವಯ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ: 23.06.2007 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ನಿಸಾರ್ ಅಹಮದ್**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು).

ಪಿ.ಆರ್. 1182

**ವಿಷಯ:** ಶ್ರೀ ಡಿ.ಆರ್. ರವಿಕುಮಾರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 9ನೇ ಎ.ಸಿ.ಎಂ.ಎಂ, ನ್ಯಾಯಾಲಯ, ಬೆಂಗಳೂರು (ಅಮಾನತ್ತಿನಲ್ಲಿರುವವರು) ಇವರ ಅಮಾನತ್ತನ್ನು ರದ್ದುಪಡಿಸಿ, ಸೇವೆಗೆ ಪುನರ್ ನೇಮಿಸುವ ಕುರಿತು.

**ಓದಲಾಗಿದೆ:**
1) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ–1/110/2006–07, ದಿನಾಂಕ: 28.8.2006.
2) ಸರ್ಕಾರದ ಆದೇಶ ಸಂಖ್ಯೆ: 378 ಪಿಪಿಇ 2006, ದಿನಾಂಕ: 9.11.2006.
3) ಸರ್ಕಾರದ ಆದೇಶ ಸಂಖ್ಯೆ: 378 ಪಿಪಿಇ 2006, ದಿನಾಂಕ: 21.5.2007.
4) ಕರ್ನಾಟಕ ಲೋಕಾಯುಕ್ತ ಕಛೇರಿ ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ.31/2006, ದಿನಾಂಕ: 26.5.2007.

**ಪ್ರಸ್ತಾವನೆ:**

ಶ್ರೀ ಡಿ.ಆರ್.ರವಿಕುಮಾರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 9ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು (ಅಮಾನತ್ತಿನಲ್ಲಿರುವವರು) ಇವರು ಶ್ರೀ ಡಿ.ವಿ.ತ್ರಿಲೋಚನ ಬಿನ್ ಡಿ.ವೀರಪ್ಪ, ಬೆಂಗಳೂರು ಇವರು ಸಿಸಿ ನಂ.19476/2003ರ ಸಂಬಂಧ ಸಾಕ್ಷಿ ನುಡಿಯಲು ಬೇರೆ ದಿನಾಂಕವನ್ನು ನೀಡಲು ಮತ್ತು ಸಾಕ್ಷಿ ನುಡಿಯಲು ಕೇಸಿಗೆ ಸಂಬಂಧಪಟ್ಟ ಕಡತವನ್ನು ನೋಡಲು ಇವರಿಂದ ದಿನಾಂಕ: 21.8.2006 ರಂದು ರೂ.1,000/– ಗಳ ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಬಲೆಗೆ ಸಿಕ್ಕಿಬಿದ್ದಿದ್ದರೆಂಬ ಆಧಾರದ ಮೇಲೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (1)ರ ದಿನಾಂಕ: 28.8.2006ರ ಪತ್ರದಲ್ಲಿ ಸದರಿಯವರನ್ನು ಅಮಾನತ್ತಿನಲ್ಲಿಡುವಂತೆ ಶಿಫಾರಸ್ಸು ಮಾಡಲಾಗಿತ್ತು. ಆ ಪ್ರಕಾರ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(2)(ಎ) ರೀತ್ಯಾ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿ ಇರಿಸಲಾಗಿತ್ತು.

ಶ್ರೀ ಡಿ.ಆರ್.ರವಿಕುಮಾರ್ ಇವರ ವಿರುದ್ಧ ಕಲಂ 7, 13(1)(ಡಿ) ಸಹವಾಚ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅನುಮತಿ ನೀಡಲಾಗಿರುತ್ತದೆ.

ಶ್ರೀ ಡಿ.ಆರ್.ರವಿಕುಮಾರ್ ಇವರು ತಮ್ಮ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ಪುನರ್ ನೇಮಕ ಮಾಡುವಂತೆ ಕೋರಿರುತ್ತಾರೆ. ಈ ಪ್ರಕರಣದ ತನಿಖೆಯು ಪೂರ್ಣಗೊಂಡಿದ್ದು, ಶ್ರೀ ಡಿ.ಆರ್.ರವಿಕುಮಾರ್ ರವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ನಿರ್ಧರಿಸಲಾಗಿದೆ. ಇವರ ವಿರುದ್ಧ ಸದ್ಯದಲ್ಲಿಯೇ ದೋಷಾರೋಪಣಾ ಪಟ್ಟಿಯನ್ನು ನಗರದ ವಿಶೇಷ ನ್ಯಾಯಾಲಯದಲ್ಲಿ ಸಲ್ಲಿಸಲಾಗುವುದು ಮತ್ತು ಸದರಿ ಆಪಾದಿತ ಅಧಿಕಾರಿಯವರನ್ನು ಅಮಾನತ್ತಿನಿಂದ ಬಿಡುಗಡೆ ಮಾಡಿ, ಮರು ನೇಮಕ ಮಾಡುವಾಗ, ಈ ಟ್ರ್ಯಾಪ್ ಪ್ರಕರಣ ನಡೆದ ಸ್ಥಳವನ್ನು ಹೊರತುಪಡಿಸಿ ಬೇರೆ ಸ್ಥಳದಲ್ಲಿ ನೇಮಕ ಮಾಡಬಹುದೆಂದು ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಹೆಚ್ಚುವರಿ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಿಳಿಸಿರುತ್ತಾರೆ.

ಈ ಪ್ರಕರಣದಲ್ಲಿ ತನಿಖೆಯು ಸಂಪೂರ್ಣವಾಗಿರುವುದರಿಂದ ಶ್ರೀ ಡಿ.ಆರ್.ರವಿಕುಮಾರ್ ಅವರ ಅಮಾನತ್ತನ್ನು ರದ್ದುಪಡಿಸಿ, ಟ್ರ್ಯಾಪ್ ಆದ ಸ್ಥಳದಿಂದ ಬೇರೆ ಕಡೆಗೆ ನೇಮಿಸಬಹುದೆಂದು ಮೇಲೆ (4) ರಲ್ಲಿ ಓದಲಾದ ದಿನಾಂಕ: 21.5.2007ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತವು ತಿಳಿಸಿರುವ ಹಿನ್ನೆಲೆಯಲ್ಲಿ ಮಾನವೀಯತೆ ದೃಷ್ಟಿಯಿಂದ ಹಾಗೂ ಕರ್ನಾಟಕ ಲೋಕಾಯುಕ್ತ ಮಾಡಿರುವ ಶಿಫಾರಸ್ಸನ್ನು ಆಧರಿಸಿ ಈ ಅಧಿಕಾರಿಯ ಅಮಾನತ್ತನ್ನು ರದ್ದುಪಡಿಸಿ, ಸೇವೆಗೆ ಪುನರ್ ನೇಮಿಸುವುದು ಸಮಂಜಸವಾಗಿ ಕಂಡುಬರುವುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಒಇ 378 ಪಿಪಿಇ 2006, ಬೆಂಗಳೂರು, ದಿನಾಂಕ: 25ನೇ ಜೂನ್ 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಶ್ರೀ ಡಿ.ಆರ್.ರವಿಕುಮಾರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು (ಅಮಾನತ್ತಿನಲ್ಲಿರುವವರು), 9ನೇ ಎ.ಸಿ.ಎಂಎಂ. ನ್ಯಾಯಾಲಯ, ಬೆಂಗಳೂರು ಇವರ ವಿರುದ್ಧ ಮೊಕದ್ದಮೆ / ಇಲಾಖಾ ವಿಚಾರಣೆ ಬಾಕಿ ಇರಿಸಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳ 10ನೇ ನಿಯಮದ 5ನೇ ಉಪ ನಿಯಮ (ಸಿ) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಇವರ ಅಮಾನತ್ತನ್ನು ರದ್ದುಪಡಿಸಿ, ಬೆಂಗಳೂರು ಗ್ರಾಮಾಂತರ ಪೊಲೀಸ್ ಅಧೀಕ್ಷಕರ ಕಛೇರಿಯಲ್ಲಿ ಹಾಲಿ ಖಾಲಿ ಇರುವ ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗೆ ವರ್ಗಾವಣೆಯ ಮೂಲಕ ಸೇವೆಗೆ ಪುನರ್ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1181

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು).

**ವಿಷಯ:** ಶ್ರೀ ಪ್ರಕಾಶ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕನಾಯಕನಹಳ್ಳಿ ಇವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಲಾ 214 ಪಿಪಿಇ 98, ದಿನಾಂಕ: 10.11.1998.
2) ಸರ್ಕಾರದ ಆದೇಶ ಸಂಖ್ಯೆ: ಲಾ 214 ಪಿಪಿಇ 98, ದಿನಾಂಕ: 22.3.2000.
3) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ–1/274/1999–2000, ದಿನಾಂಕ: 21.10.2006.

**ಪ್ರಸ್ತಾವನೆ:**

ಶ್ರೀ ಪ್ರಕಾಶ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕನಾಯಕನಹಳ್ಳಿ, ಅವರು ಈ ಹಿಂದೆ ಚನ್ನಪಟ್ಟಣದ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಬೆಂಗಳೂರು ಗ್ರಾಮಾಂತರ ಲೋಕಾಯುಕ್ತದಲ್ಲಿ ಲಂಚ ಆರೋಪದ ಪ್ರಕರಣ (ಪ್ರಕರಣ ಸಂಖ್ಯೆ: ಸಿಆರ್:6/98) ದಾಖಲಾಗಿದ್ದರಿಂದ ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಸದರಿಯವರನ್ನು ಅಮಾನತ್ತಿನಲ್ಲಿ ಇಡಲಾಗಿತ್ತು.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಮೊಕದ್ದಮೆ / ಇಲಾಖಾ ವಿಚಾರಣೆ ಬಾಕಿ ಇರಿಸಿ, ಇವರ ಅಮಾನತ್ತನ್ನು ರದ್ದುಪಡಿಸಿ, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕನಾಯಕನಹಳ್ಳಿ ಇಲ್ಲಿನ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರ್ಗಾವಣೆಯ ಮೂಲಕ ಸೇವೆಗೆ ಪುನರ್ ನೇಮಿಸಲಾಗಿತ್ತು. ಸದರಿ ಅಧಿಕಾರಿಯವರು ಸದರಿ ಹುದ್ದೆಯ ಪ್ರಭಾರವನ್ನು ದಿನಾಂಕ: 10.04.2000ರ ಪೂರ್ವಾಹ್ನದಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಶ್ರೀ ಪ್ರಕಾಶ್ ಇವರ ಮೇಲೆ ಮೊಕದ್ದಮೆ ಬಗ್ಗೆ ಬೆಂಗಳೂರಿನ ಮಾನ್ಯ ವಿಶೇಷ ನ್ಯಾಯಾಧೀಶರು, 23ನೇ ಅಧಿಕ ಸತ್ರ ನ್ಯಾಯಾಲಯ (ಸಿಸಿಹೆಚ್ 24ನೇ ನ್ಯಾಯಾಲಯ) ಇಲ್ಲಿ ಕರ್ನಾಟಕ ಲೋಕಾಯುಕ್ತರು, ಬೆಂಗಳೂರು ರವರು ಮೊಕದ್ದಮೆ ಸಂಖ್ಯೆ: 6/1998 ರಲ್ಲಿ ಲೋಕಾಯುಕ್ತರು ಸಲ್ಲಿಸಿದ್ದ ಬಿ ವರದಿಯನ್ನು ಒಪ್ಪಿಕೊಂಡು, ದಿನಾಂಕ: 29.1.2003 ರಂದು ಬಿ ವರದಿಯನ್ನು ಅನುಮೋದಿಸಿ ಮೊಕದ್ದಮೆಯನ್ನು ಮುಕ್ತಾಯಗೊಳಿಸಿರುತ್ತಾರೆ.

ಮೇಲೆ ಓದಲಾದ (3)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರದಲ್ಲಿ ಶ್ರೀ ಪ್ರಕಾಶ್ ಇವರಿಗೆ ದಿನಾಂಕ: 19.1.1998 ರಿಂದ 9.4.2000ರ ವರೆಗಿನ ನಿಲಂಬನಾ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ ಸಕ್ರಮಗೊಳಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 537 ಪಿಪಿಇ 2006, ಬೆಂಗಳೂರು, ದಿನಾಂಕ: 17ನೇ ಜುಲೈ 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಶ್ರೀ ಪ್ರಕಾಶ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕನಾಯಕನಹಳ್ಳಿ ಇವರ ದಿನಾಂಕ: 19.11.1998 ರಿಂದ 09.04.2000ರ ವರೆಗಿನ ನಿಲಂಬನಾ ಅವಧಿಯನ್ನು (ಎರಡೂ ದಿನಗಳು ಸೇರಿ) 1957ರ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 100 (1)(ಬಿ) ರನ್ವಯ ಎಲ್ಲಾ ಉದ್ದೇಶಗಳಿಗೂ ಕರ್ತವ್ಯದ ಅವಧಿ ಎಂಬುದಾಗಿ ಪರಿಗಣಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1308

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು).

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಆರ್. ನಾರಾಯಣರೆಡ್ಡಿ, ವಾಣಿಜ್ಯಶಾಸ್ತ್ರ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಕಾರಣ ಕೇಳುವ ನೋಟೀಸು ಸಂಖ್ಯೆ: ಇಡಿ 293 ಡಿಸಿಇ 2000 ದಿನಾಂಕ: 16.07.2005.

2) ಪತ್ರ ಸಂಖ್ಯೆ: ಕಾಶಿಆ/87/ಉಶಿನ/97/ಸಿವಿ5, ದಿನಾಂಕ: 12.01.2006.

3) ವಿಜಯ ಕರ್ನಾಟಕ ದಿನ ಪತ್ರಿಕೆಯಲ್ಲಿ ದಿನಾಂಕ: 13.10.2006 ರಂದು ಪ್ರಕಟವಾದ ಪ್ರಕಟಣೆ.

**ಪ್ರಸ್ತಾವನೆ:**

ಶ್ರೀ ಆರ್. ನಾರಾಯಣರೆಡ್ಡಿ, ವಾಣಿಜ್ಯಶಾಸ್ತ್ರ ಉಪನ್ಯಾಸಕರು ದಿನಾಂಕ: 30.7.98 ರಂದು ನಿಯೋಜನೆ ಮೇಲೆ ಇತರೆ ಇಲಾಖೆಗಳಿಗೆ ತೆರಳಿ ಈಗಾಗಲೇ 07 ವರ್ಷಗಳಿಗಿಂತಲೂ ಹೆಚ್ಚಿನ ಕಾಲ ವಿವಿಧ ಇಲಾಖೆಗಳಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದು, ಇವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಯಿಂದ ದಿನಾಂಕ: 08.08.2003 ರಂದು ಮಾತೃ ಇಲಾಖೆಗೆ ಹಿಂತಿರುಗಿಸಲಾಗಿತ್ತಾದರೂ ಇವರು ಮಾತೃ ಇಲಾಖೆಯಲ್ಲಿ ಕರ್ತವ್ಯಕ್ಕೆ ಹಾಜರಾಗಲಿಲ್ಲ. ಈ ಮಧ್ಯೆ ಇವರು ಅನಧಿಕೃತ ಗೈರು ಹಾಜರಿರುವಾಗಲೇ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಗೆ ನಿಯೋಜನೆಯ ಮೇಲೆ ನೇಮಕಾತಿ ಪಡೆದುಕೊಂಡು ಉಪ ನಿರ್ದೇಶಕರಾಗಿ ಮಡಿಕೇರಿ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದರಾದರೂ, ಮಾತೃ ಇಲಾಖೆಯಾದ ಶಿಕ್ಷಣ ಇಲಾಖೆಯ ಗಮನಕ್ಕೆ ಬಂದಿರಲಿಲ್ಲ. ಈ ಮಧ್ಯೆ ಇವರೂ ಒಳಗೊಂಡಂತೆ ಇತರೆ ಇಲಾಖೆಗಳಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದ ಎಲ್ಲಾ ಉಪನ್ಯಾಸಕರ ಸೇವೆಯನ್ನು ದಿನಾಂಕ: 13.08.2004 ರಂದು ಮಾತೃ ಇಲಾಖೆಗೆ ಹಿಂದಕ್ಕೆ ಪಡೆಯಲಾಯಿತು. ಆ ಪ್ರಕಾರ ದಿನಾಂಕ: 28.09.2004 ರಲ್ಲಿ ಮಾಲೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಇವರಿಗೆ ಸ್ಥಳ ನಿಯುಕ್ತಿಗೊಳಿಸಿದ್ದಾಗ್ಯೂ ಮಾಲೂರಿನಲ್ಲಿಯೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ದೀರ್ಘ ಅವಧಿಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವ ಕಾರಣ, ಕ್ರಮಾಂಕ (1)ರ ದಿನಾಂಕ: 16.07.2005 ರಲ್ಲಿ ಇವರಿಗೆ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಲು ಕಳುಹಿಸಿದ ನೋಟೀಸು ಜಾರಿಯಾಗದೇ ಹಿಂತಿರುಗಿದೆ. ಶ್ರೀ ಆರ್.ನಾರಾಯಣರೆಡ್ಡಿಯವರು ಇಂದಿಗೂ ಕರ್ತವ್ಯಕ್ಕೆ ಹಾಜರಾಗಿಲ್ಲದ ಕಾರಣ ಸೇವೆಯಿಂದ ವಜಾಗೊಳಿಸುವುದರ ಬಗ್ಗೆ ಕ್ರಮಕೈಗೊಳ್ಳಲು ಮೇಲೆ ಓದಲಾದ ಕಾಲೇಜು ಶಿಕ್ಷಣ ಆಯುಕ್ತರ ದಿನಾಂಕ: 12.01.2006ರ ತಮ್ಮ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ತದನಂತರ ಮೇಲೆ ಓದಲಾದ ಕ್ರಮಾಂಕ (3) ರಲ್ಲಿ ಇವರ ಅನಧಿಕೃತ ಗೈರು ಹಾಜರಾತಿ ಕುರಿತು ದಿನಾಂಕ: 13.10.2006ರ ವಿಜಯ ಕರ್ನಾಟಕ ದಿನ ಪತ್ರಿಕೆಯಲ್ಲಿ ಪತ್ರಿಕಾ ಪ್ರಕಟಣೆ ನೀಡಿ 7 ದಿನಗಳ ಒಳಗಾಗಿ ಸರ್ಕಾರಕ್ಕೆ ಖುದ್ದಾಗಿ ಹಾಜರಾಗುವಂತೆಯೂ, ತಪ್ಪಿದ್ದಲ್ಲಿ ಏಕ ಪಕ್ಷೀಯವಾಗಿ ಕ್ರಮಕೈಗೊಳ್ಳಲಾಗುವುದೆಂದು ಆರೋಪಿತರಿಗೆ ತಿಳಿಸಲಾಗಿತ್ತು. ಈ ಪ್ರಕರಣದಲ್ಲಿ ಇಲಾಖೆ ನೀಡಿರುವ ಕಾರಣ ಕೇಳುವ ನೋಟೀಸ್‌ಗಾಗಲೀ ಇಲ್ಲವೇ ಪತ್ರಿಕಾ ಪ್ರಕಟಣೆ ಮೂಲಕ ತಿಳುವಳಿಕೆ ನೀಡಿದ್ದಾಗ್ಯೂ ಶ್ರೀ ಆರ್.ನಾರಾಯಣರೆಡ್ಡಿ ಇವರಿಂದ ಯಾವುದೇ ಪ್ರತಿಕ್ರಿಯೆ ವ್ಯಕ್ತವಾಗದ ಕಾರಣ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲು ಸರ್ಕಾರ ನಿರ್ಧರಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 156 ಡಿಸಿಇ 2006, ಬೆಂಗಳೂರು, ದಿನಾಂಕ: 23ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಆರ್. ನಾರಾಯಣರೆಡ್ಡಿ, ವಾಣಿಜ್ಯಶಾಸ್ತ್ರ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ (1958) ನಿಯಮ 108 ಹಾಗೂ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ (1957) ನಿಯಮ 14(ii) ಹಾಗೂ ಅದೇ ನಿಯಮಗಳ

ನಿಯಮ 8(viii) ನ್ನು ಓದಿಕೊಂಡಂತೆ ಪ್ರದತ್ತವಾದ ಅಧಿಕಾರ ಚಲಾಯಿಸಿ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ.ನಂದಕುಮಾರ್**

ಪಿ.ಆರ್. 1357 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆಯಲ್ಲಿ ವಿಮಾನ ನಿಲ್ದಾಣ ಸ್ಥಾಪನೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಮೂಅಇ 16 ರಾಅವಿ 2002, ದಿನಾಂಕ: 03.01.2007.

2) ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಇವರ ಪತ್ರ ಸಂಖ್ಯೆ: ಎಲ್ಎನ್‌ಡಿ (1) ಸಿಆರ್–246–06–07 ದಿನಾಂಕ: 07.07.2007.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 03.01.2007 ರಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಒಂದು ಹೊಸ ವಿಮಾನ ನಿಲ್ದಾಣ ನಿರ್ಮಿಸಲು ಅವಶ್ಯವಿರುವ 662 ಎಕರೆ 33 ಗುಂಟೆ ಜಮೀನಿನ ಭೂಸ್ವಾಧೀನಕ್ಕಾಗಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರು ಅಂದಾಜಿಸಿದ ಒಟ್ಟು ವೆಚ್ಚ ರೂ.14,58,49,000.00 ಗಳಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಭೂಸ್ವಾಧೀನ ಪ್ರಕ್ರಿಯೆ ಕೈಗೊಳ್ಳಲು ಪ್ರಾರಂಭಿಕವಾಗಿ ರೂ.5,83,00,000.00 ಗಳನ್ನು ಭೂಸ್ವಾಧೀನಕ್ಕೆ ಸಂಬಂಧಪಟ್ಟಂತೆ ಅಂತಿಮ ಅಧಿಸೂಚನೆ ಹೊರಡಿಸುವ ಹಾಗೂ ಪರಿಹಾರ ಧನವನ್ನು ಬಟವಾಡೆ ಮಾಡುವ ಬಟವಾಡೆ ಮಾಡುವ ಮುನ್ನ ಎಲ್ಲಾ ಔಪಚಾರಿಕ ಕಾರ್ಯಗಳನ್ನು ಪೂರೈಸುವ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ii. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರ ದಿನಾಂಕ: 7.7.2007 ರಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ತಮ್ಮ ಪ್ರಸ್ತಾವನೆಯಲ್ಲಿ ಶಿವಮೊಗ್ಗ ವಿಮಾನ ನಿಲ್ದಾಣದ ಭೂಸ್ವಾಧೀನಕ್ಕಾಗಿ ರೂ.25,96,00,000.00 ಗಳ ವೆಚ್ಚವನ್ನು ಅಂದಾಜಿಸಿ ಭೂಸ್ವಾಧೀನ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ಈ ಕೆಳಕಂಡಂತೆ ಅಗತ್ಯವಿರುವ ಹಣವನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ:

<table>
<tr><th>ಕ್ರಮ ಸಂಖ್ಯೆ</th><th>ವಿವರ</th><th>ಅಂದಾಜು ಮೊಬಲಗು (ರೂ.ಕೋಟಿಗಳಲ್ಲಿ)</th></tr>
<tr><td>1</td><td>ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಮೂಲಕ ಹಿಡುವಳಿ ಜಮೀನನ್ನು ಭೂಸ್ವಾಧೀನ ಪಡಿಸಿಕೊಳ್ಳಲು ಅಗತ್ಯವಿರುವ ಮೊಬಲಗು (ಎಕರೆಯೊಂದಕ್ಕೆ ರೂಪಾಯಿ 700000/– ದಂತೆ)</td><td>9–10</td></tr>
<tr><td>2</td><td>ಸೋಗಾನೆ ಗ್ರಾಮದ ಬಗರ್ ಹುಕುಂ ಜಮೀನು ಸಾಗುವಳಿದಾರರಿಗೆ ಪಾವತಿಸಲು ಅಗತ್ಯವಿರುವ ಮೊಬಲಗು
<table>
<tr><th>ಕ್ರ.ಸಂ.</th><th>ಜಮೀನಿನ ವಿವರ</th><th>ಎ–ಗು</th></tr>
<tr><td>1</td><td>ಖುಷ್ಕಿ</td><td>469–26</td></tr>
<tr><td>2</td><td>ತರಿ</td><td>35–22</td></tr>
<tr><td>3</td><td>ಭಾಗಾಯ್ತು</td><td>25–13</td></tr>
<tr><td>4</td><td>ಪುನರ್ವಸತಿ ಕಲ್ಪಿಸಲು ಅಗತ್ಯವಿರುವ ಜಮೀನು</td><td>60–00</td></tr>
<tr><td></td><td>ಒಟ್ಟು</td><td>590–21</td></tr>
</table>
ಎಕರೆಯೊಂದಕ್ಕೆ ರೂಪಾಯಿ 200000/– ದಂತೆ ದಯಾತ್ಮಕ ಪರಿಹಾರ ಮಂಜೂರು ಮಾಡಲು ಅಗತ್ಯವಿರುವ ಮೊಬಲಗು</td><td>11–81</td></tr>
<tr><td>3</td><td>ಬಗರ್ ಹುಕುಂ ಜಮೀನಿನಲ್ಲಿರುವ ಪಂಪ್‌ಸೆಟ್, ಮರಗಳು, ಕಟ್ಟಡಗಳು ಹಾಗೂ ತರಿ, ಭಾಗಾಯ್ತು ಜಮೀನಿಗೆ ಪಾವತಿಸಲು ಅಗತ್ಯವಿರುವ ಮೊಬಲಗು</td><td>3–00</td></tr>
<tr><td>4</td><td>ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸಲು ಲೇಔಟ್ ನಿರ್ಮಿಸಲು ಹಾಗೂ ಆಶ್ರಯ ಯೋಜನೆಯಡಿಯಲ್ಲಿ ಮನೆ ನಿರ್ಮಿಸಲು ಅಗತ್ಯವಿರುವ ಮೊಬಲಗು</td><td>2–05</td></tr>
<tr><td></td><td>ಒಟ್ಟು</td><td>25–96</td></tr>
</table>

iii. ಮೇಲಿನ ಪ್ರಸ್ತಾವನೆಯನ್ನು ಸರ್ಕಾರ ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮೂಅಇ 70 ರಾಅವಿ 2007, ಬೆಂಗಳೂರು, ದಿನಾಂಕ: 19ನೇ ಜುಲೈ 2007**

ಶಿವಮೊಗ್ಗ ವಿಮಾನ ನಿಲ್ದಾಣಕ್ಕಾಗಿ ಸುಮಾರು 662.38 ಎಕರೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲಾಗುತ್ತಿದ್ದು, ಇದರಲ್ಲಿ 135 ಎಕರೆ ಜಮೀನು ಖಾಸಗಿ ಜಮೀನಾಗಿದ್ದು, ಉಳಿದ 529 ಎಕರೆ ಸರ್ಕಾರಿ ಜಮೀನಾಗಿರುತ್ತದೆ. ಅದರಲ್ಲಿ ಸುಮಾರು 300 ಕ್ಕಿಂತ ಹೆಚ್ಚು ಬಗರ್ ಹುಕುಂ ಸಾಗುವಳಿದಾರರು ಇರುತ್ತಾರೆ.

2. ಭೂಸ್ವಾಧೀನಕ್ಕೋಸ್ಕರ ಈಗಾಗಲೇ ರೂ.5.83 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

3. ಬಗರ್ ಹುಕುಂ ಸಾಗುವಳಿ ಮಾಡುತ್ತಾ ಬಂದಿರುವ ಸಣ್ಣ ಮತ್ತು ಅತಿ ಸಣ್ಣ ರೈತರನ್ನು ಸ್ಥಳಾಂತರಿಸಿ ಅವರಿಗೆ ಸೂಕ್ತ ಪರಿಹಾರ ಮತ್ತು ಪುನರ್ವಸತಿ ವ್ಯವಸ್ಥೆಯನ್ನು ಕಲ್ಪಿಸಲು ಪ್ರತಿ ಎಕರೆಗೆ ರೂ.2.00 ಲಕ್ಷದಂತೆ ಹಾಗೂ 4.00 ಎಕರೆಗೆ ಮೀರದಂತೆ ದಯಾತ್ಮಕ ಪರಿಹಾರ ನೀಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

4. ಇದಕ್ಕಾಗಿ ರೂ.20.13 ಕೋಟಿಗಳನ್ನು ಲೆಕ್ಕಶೀರ್ಷಿಕೆ 5465-01-190-1-05 (ಯೋಜನೆ)-211-ಬಂಡವಾಳಗಳು-ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ ಇದರಡಿಯಲ್ಲಿ 2007-08 ರಲ್ಲಿ ಒದಗಿಸಿರುವ ರೂ.50.00 ಕೋಟಿಗಳಲ್ಲಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

5. ಈ ಮೊತ್ತವನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಹಾಗೂ ಕಾರ್ಯಕಾರಿ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರು ಪೇಯಿಸ್ ರಸೀತಿಯ (Payees Receipt) ಮುಖೇನ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜು ಪಡೆದು ಹಣ ತೆಗೆಯಬಹುದಾಗಿದೆ.

6. ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ: ಆಇ 1196 ವೆಚ್ಚ-I/2007, ದಿನಾಂಕ: 18.7.2007 ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 1356

ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಕೆ.ಕಾಂತರಾಜ್, ಸಹಾಯಕ ತೋಟಗಾರಿಕೆ ನಿರ್ದೇಶಕರು, ತೋಟಗಾರಿಕೆ ಇಲಾಖೆ ಇವರ ವಿರುದ್ಧ ಶಿಸ್ತಿನಕ್ರಮ - ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1) ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ಸಂಖ್ಯೆ: ತೋಇ/ಆ/ಸಿ/ವಿ೧10-1/61/2000-2001, ದಿನಾಂಕ: 22/28.12.2005.
2) ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ಸಂಖ್ಯೆ: ತೋಇ/ಆ/ಸಿ/ವಿ೧10-1/61/2000-2001, ದಿನಾಂಕ: 7.1.2002 ಮತ್ತು 10.6.2004.
3) ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ಸಂಖ್ಯೆ: ತೋಇ/ಆ/ಸಿ/ವಿ೧10-1/61/2000-2001, ದಿನಾಂಕ: 21/29.3.2006.
4) ಸರ್ಕಾರದ ಪತ್ರ ಸಂಖ್ಯೆ: ಕೃತೋಇ 78 ತೋಸೇಪ 2006, ದಿನಾಂಕ: 9.8.2006 ಮತ್ತು 15/16.12.2006.
5) ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರದ ಸಂಖ್ಯೆ: ಪಿಎಸ್‌ಸಿ/86/ಸಿಎನ್‌ಎಸ್/2006, ದಿನಾಂಕ: 2.9.2006 ಮತ್ತು 25.1.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ಶ್ರೀ ಕೆ.ಕಾಂತರಾಜು, ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಲ್ಲಾ ಪಂಚಾಯತ್) ಮುದ್ದೇಬಿಹಾಳ ತಾಲ್ಲೂಕು, ಬಿಜಾಪುರ ಜಿಲ್ಲೆಯಲ್ಲಿ 1999-2000ನೇ ಅವಧಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಯಾವುದೇ ಮನವಿ ಇಲ್ಲದೇ ಶ್ರೀ ಎಸ್.ವಿ.ಹಿರೇಮಠ್, ಎನ್ನುವವರಿಗೆ ಸೇರಿದ ಕೊಪ್ಪ ಗ್ರಾಮದ ಸರ್ವೆ ಸಂಖ್ಯೆ: 94ರ ಜಮೀನಿನಲ್ಲಿ ಬಾಳೆ ಫಸಲಿಗಾಗಿ ಹನಿ ನೀರಾವರಿ ಅಳವಡಿಸಿರುವುದಾಗಿ ಸ್ಥಳ ಪರಿಶೀಲನೆ ಮಾಡಿರುವುದಾಗಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ, ಶ್ರೀ ಬಸವೇಶ್ವರ ಟ್ರೇಡರ್ಸ್‌ರವರೊಂದಿಗೆ ಶಾಮೀಲಾಗಿ ನಕಲಿ ಹೆಬ್ಬೆಟ್ಟಿನ ಸಹಿಯೊಂದಿಗೆ ರೂ.36,528/- ಗಳನ್ನು ಪಡೆದಿರುವುದಾಗಿ ಆರೋಪಿಸಲಾಗಿತ್ತು.

ಈ ಹಿನ್ನಲೆಯಲ್ಲಿ ಸತ್ಯಾಸತ್ಯತೆಯನ್ನು ಅರಿಯಲು ಮೇಲೆ ಓದಲಾದ (2) ರಲ್ಲಿ ತೋಟಗಾರಿಕೆ ನಿರ್ದೇಶಕರು ಇವರ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಿದ್ದು, ವಿಚಾರಣೆಯಲ್ಲಿ ಸದರಿಯವರ ವಿರುದ್ಧ ಮಾಡಲಾದ ಆರೋಪವು ಸಾಕ್ಷಿ ಆಧಾರಗಳಿಂದ ಸಾಭೀತಾಗಿರುತ್ತದೆ. ನಿಯಮಾನುಸಾರ ವಿಚಾರಣಾ ವರದಿಯನ್ನು ಎರಡನೇ ಕಾರಣ ಕೇಳುವ ನೋಟೀಸಿನೊಂದಿಗೆ ಶ್ರೀ ಕೆ.ಕಾಂತರಾಜ್‌ರವರಿಗೆ ಜಾರಿ ಮಾಡಲಾಗಿದ್ದು ಸದರಿಯವರು ಈ ವಿಚಾರಣಾ ವರದಿಯನ್ನು

ಒಪ್ಪಿರುವುದಿಲ್ಲವೆಂದು ತಿಳಿಸುತ್ತಾ, ಆರೋಪಿತ ಅಧಿಕಾರಿಯೂ ತಮ್ಮನ್ನು ಆರೋಪದಿಂದ ರಕ್ಷಿಸಿಕೊಳ್ಳುವ ಯಾವುದೇ ಸಮರ್ಥನೆ ಅಥವಾ ದಾಖಲೆಗಳನ್ನು ಒದಗಿಸಿರುವುದಿಲ್ಲವಾದ್ದರಿಂದ ಮೇಲೆ ಓದಲಾದ (3) ರಲ್ಲಿ ಶ್ರೀ ಕೆ.ಕಾಂತರಾಜ್‌ರವರು ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವ ಮೊತ್ತ ರೂ.36,528/– ಗಳನ್ನು ಶೇಕಡ 8ರ ಬಡ್ಡಿ ಸಮೇತ ವಸೂಲು ಮಾಡುವುದರೊಂದಿಗೆ ಇವರಿಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(v), 8(vi) ಮತ್ತು 8(vii) ರಡಿ ಕಠಿಣ ದಂಡನೆಯನ್ನು ವಿಧಿಸುವಂತೆ ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

ಮೇಲೆ ಓದಲಾದ (4)ರ ಸರ್ಕಾರದ ಪತ್ರದಲ್ಲಿ ಶ್ರೀ ಕೆ.ಕಾಂತರಾಜ್, ಸಹಾಯಕ ತೋಟಗಾರಿಕೆ ನಿರ್ದೇಶಕರು ಇವರಿಂದ ಸರ್ಕಾರಕ್ಕೆ ಉಂಟಾದ ನಷ್ಟದ ಮೊತ್ತವನ್ನು ಬಡ್ಡಿ ಸಮೇತವಾಗಿ ವಸೂಲಿ ಮಾಡಲು ಮತ್ತು ಇವರಿಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(v), 8(vi) ಮತ್ತು 8(vii) ರಡಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ಕಠಿಣ ದಂಡನೆಯನ್ನು ವಿಧಿಸಲು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಸರ್ಕಾರದ ಈ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗವು ಮೇಲೆ ಓದಲಾದ (5)ರ ಪತ್ರದಲ್ಲಿ ತನ್ನ ಸಹಮತಿಯನ್ನು ನೀಡಿರುತ್ತದೆ.

ಈ ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 78 ತೋಸೇಪ 2006, ಬೆಂಗಳೂರು, ದಿನಾಂಕ: 23ನೇ ಜುಲೈ 2007**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಗಳ ಹಿನ್ನಲೆಯಲ್ಲಿ ಶ್ರೀ ಕೆ.ಕಾಂತರಾಜ್, ಸಹಾಯಕ ತೋಟಗಾರಿಕೆ ನಿರ್ದೇಶಕರು ಇವರಿಂದ ಸರ್ಕಾರಕ್ಕೆ ಉಂಟಾದ ನಷ್ಟದ ಬಾಬ್ತಿನ ಮೊತ್ತ ರೂ.36,528–00 (ಮುವತ್ತಾರು ಸಾವಿರದ ಐದು ನೂರ ಇಪ್ಪತ್ತೆಂಟು ರೂಪಾಯಿಗಳು ಮಾತ್ರ) ಗಳನ್ನು ಶೇಕಡಾ 8ರ ಬಡ್ಡಿಯೊಂದಿಗೆ ವಸೂಲು ಮಾಡಲು ಹಾಗೂ ಇವರು ಸುಳ್ಳು ದಾಖಲೆಗಳನ್ನು ಸೃಷ್ಟಿಸಿ, ಸರ್ಕಾರದ ಹಣ ದುರುಪಯೋಗಪಡಿಸಿಕೊಂಡ ಆರೋಪದ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ನಿಯಮ 8(vi) ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಪಿ.ಆರ್. 1358 ಸರ್ಕಾರದ ಅಧೀನ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಎಂ.ಎ.ರಾಜಶೇಖರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ– ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ: ಸಿಆಸುಇ 91 ಎಸ್‌ಇಎನ್ 01 ದಿನಾಂಕ: 17.01.2007.

2) ಶ್ರೀ ಎಂ.ಎ.ರಾಜಶೇಖರ್, ನಿವೃತ್ತ, ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ: 19.02.2007.

**ಪ್ರಸ್ತಾವನೆ:**

ಶ್ರೀ ಎಂ.ಎ.ರಾಜಶೇಖರ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಶಿವಮೊಗ್ಗ ಜಿಲ್ಲೆಯ ತುಂಗಾ ಮೇಲ್ದಂಡೆ ಯೋಜನೆಯಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಸ್ವಾಧೀನಪಡಿಸಿಕೊಂಡ ಭೂಮಿಯ ಪರಿಹಾರಧನ ವಿತರಣೆಗೆ ಸಂಬಂಧಿಸಿದಂತೆ ಜಮೀನಿನ ಖಾತೆದಾರರಿಂದ ಪರಿಹಾರದ ಶೇ.10 ರಂತೆ ಲಂಚದ ಹಣ ಪಡೆದುಕೊಂಡು ಲಂಚ ನಿರೋಧ ಕಾಯ್ದೆಯಡಿ ಅಕೃತ್ಯ ಎಸಗಿ ನಡತೆ ನಿಯಮಗಳನ್ನು ಉಲ್ಲಂಘಿಸಿದ ಆರೋಪ, ಹೊಳಲೂರು ಗ್ರಾಮದ ಮಲ್ಲೇಶಪ್ಪ ಎಂಬುವವರ ಭೂಸ್ವಾಧೀನದ ಸಂಬಂಧ ಪರಿಹಾರಧನ ಪಾವತಿಸುವ ಬಗ್ಗೆ ಅವಾರ್ಡ್ ಮೊತ್ತದ ಶೇ.5 ರಂತೆ ಲೆಕ್ಕ ಹಾಕಿ ರೂ.20,000/– ಗಳನ್ನು ಪಡೆದು ಉಳಿದ ರೂ.2,000/– ಗಳನ್ನು ವಸೂಲಿ ಮಾಡಲು ಕ್ರಮ ಕೈಗೊಂಡ ಭ್ರಷ್ಟಾಚಾರದ ಆರೋಪ ಶ್ರೀ ಗಣೇಶನ್, ಐ.ಎ.ಎಸ್. ಹಿಂದಿನ ಜಿಲ್ಲಾಧಿಕಾರಿ, ಶಿವಮೊಗ್ಗ ಇವರು ತಮ್ಮ ಕಛೇರಿಗೆ ಕರೆಯಿಸಿ ಎಚ್ಚರಿಕೆ ನೀಡಿದ್ದಾಗ್ಯೂ ಭ್ರಷ್ಟಾಚಾರದ ಕಾರ್ಯ ಮುಂದುವರಿಸಿದ ಆರೋಪಗಳಿಗಾಗಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 17.01.2007ರ ನೋಟೀಸ್ ಹಾಗೂ ದೋಷಾರೋಪಣೆಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ರನ್ವಯ ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಆರೋಪಿತರು ಮೇಲೆ (2) ರಲ್ಲಿ ಓದಲಾದ ದಿನಾಂಕ: 19.02.2007ರ ಉತ್ತರ ಸಲ್ಲಿಸಿ, ಇದು ಜಂಟಿ ಇಲಾಖಾ ವಿಚಾರಣೆ ಅಲ್ಲ. ಈ ಪ್ರಕರಣದ ಆರೋಪಿತರಲ್ಲೊಬ್ಬರಾದ ಶ್ರೀ ಡಿ.ಜೆ.ಬಸವರಾಜು, ದ್ವಿತೀಯ ದರ್ಜೆ ಸಹಾಯಕರು ಅವರ ವಿರುದ್ಧ ವಿಧಿಸಿರುವ ದಂಡನೆಯ ವಿರುದ್ಧ ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಕಂದಾಯ ಇಲಾಖೆಯಲ್ಲಿ ಬಾಕಿ ಇದೆ. ಹೀಗಾಗಿ ಈ ವಿಷಯವು sub-judiced ಆಗಿದೆ. ತಮ್ಮ ವಿರುದ್ಧ ಮೇಲ್ನೋಟಕ್ಕೆ ಸಾಬೀತುಪಡಿಸಬಲ್ಲ ಯಾವುದೇ

ಆರೋಪಗಳಿರುವುದಿಲ್ಲ. ಹೀಗಾಗಿ ತಮ್ಮ ವಿರುದ್ಧ ಇಲಾಖಾ ವಿಚಾರಣೆಯನ್ನು ವಿಧಿಸಿರಲಿಲ್ಲ. ಆಡಳಿತಾತ್ಮಕ ನೋಟೀಸ್ ನೀಡಿ ಅದಕ್ಕೆ ಉತ್ತರ ಪಡೆದು ಅದನ್ನು ಪರಿಶೀಲಿಸಿದ ನಂತರ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಬೇಕಾಗಿದ್ದರೂ ಸಹ ತಮ್ಮ ವಿರುದ್ಧ ಆ ರೀತಿ ಮಾಡದೇ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಗಿದೆ. ಸುಮಾರು 5 ವರ್ಷ 5 ತಿಂಗಳು 15 ದಿನಗಳ ನಂತರ ಅಂದರೆ ನಿವೃತ್ತಿ ಹೊಂದುವ ಅಂಚಿನಲ್ಲಿರುವಾಗ ನೋಟೀಸ್ ನೀಡಿರುತ್ತಾರೆ. ದಿನಾಂಕ: 02.08.2001 ರಂದು ಮಾಡಲಾದ ಆರೋಪದ ಸಂಬಂಧ ದೋಷಾರೋಪಣೆಗಳನ್ನು ತಯಾರಿಸಲಾಗಿರುವುದರಿಂದ ಅದರಲ್ಲಿ ಯಾವುದೇ ಸ್ಪಷ್ಟ ಹಾಗೂ ನಿರ್ದಿಷ್ಟ ಆರೋಪಗಳಿರುವುದಿಲ್ಲ. ಈ ಸಂಬಂಧ ಲೋಕಾಯುಕ್ತದಲ್ಲಾಗಲೀ ಅಥವಾ ಸಂಬಂಧಪಟ್ಟ ಪ್ರಾಧಿಕಾರದಲ್ಲಾಗಲೀ ಯಾವುದೇ ದೂರನ್ನು ಸಲ್ಲಿಸಿರುವುದಿಲ್ಲ ಹಾಗೂ ಶ್ರೀ ಬಸವರಾಜು, ದ್ವಿತೀಯ ದರ್ಜೆ ಸಹಾಯಕರು ಅವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಸಾಕ್ಷಿದಾರರಾಗಿದ್ದ ಶ್ರೀ ಡಿ.ನಾಗರಾಜ್ ಮತ್ತು ಶ್ರೀ ಈಶ್ವರಪ್ಪ ಅವರು ತಮ್ಮ ವಿರುದ್ಧ ಯಾವುದೇ ಹೇಳಿಕೆಯನ್ನು ನೀಡಿಲ್ಲವೆಂದು ತಿಳಿಸಿರುತ್ತಾರೆ ಮತ್ತು ಜಿಲ್ಲಾಧಿಕಾರಿಗಳ ಆದೇಶದನ್ವಯ ಹಣವನ್ನು ರೆವೆನ್ಯೂ ಡಿಪಾಸಿಟ್‌ನಲ್ಲಿ ಇಡಲಾಗಿರುವುದರಿಂದ ತಮ್ಮ ವಿರುದ್ಧದ ಈ ಆರೋಪಗಳಲ್ಲಿ ಯಾವುದೇ ಹುರುಳಿಲ್ಲದಿರುವುದರಿಂದ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿತರ ಉತ್ತರವನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಜಿಲ್ಲಾಧಿಕಾರಿಗಳ ಆದೇಶದನ್ವಯ ಹಣವನ್ನು ರೆವೆನ್ಯೂ ಡಿಪಾಸಿಟ್‌ನಲ್ಲಿ ಇಟ್ಟಿರುವುದು ಕಂಡು ಬರುತ್ತದೆ. ಕಛೇರಿಯಲ್ಲಿ ರೈತರಿಗೆ ಕಿರುಕುಳ ಕೊಡುತ್ತಿರುವ ಅಂಶವು ಸ್ಪಷ್ಟಪಡುತ್ತದೆ. ಸದರಿ ಕಛೇರಿಯಲ್ಲಿನ ದುರ್ನಡತೆಗಳಿಗೆ ಕಛೇರಿ ಮುಖ್ಯಸ್ಥರಾಗಿ ಇವರು ಹೊಣೆಗಾರರಾಗಿದ್ದರೂ ಸಹ ಭೂಪರಿಹಾರ ಹಣವನ್ನು ದುರುಪಯೋಗಪಡಿಸಿಕೊಂಡಿರುವ ಆರೋಪವಿಲ್ಲದೆ ಇವರು ಪರೋಕ್ಷವಾಗಿ ಪರಿಹಾರಧನವನ್ನು ನೀಡಲು ಕೇವಲ ಲಂಚ ಕೇಳುತ್ತಾರೆಂದು ಆರೋಪ ಮಾತ್ರ ಇರುವುದರಿಂದ ಹಾಗೂ ಸದರಿ ಅಧಿಕಾರಿಯವರು ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಹಿನ್ನೆಲೆಯಲ್ಲಿ ಪ್ರಕರಣವನ್ನು ಮುಕ್ತಾಯಗೊಳಿಸಲು ತೀರ್ಮಾನಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 91 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 20ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಎಂ.ಎ.ರಾಜಶೇಖರ್, ನಿವೃತ್ತ ಕೆಎಎಸ್ ಅಧಿಕಾರಿ ಅವರನ್ನು ದಿನಾಂಕ: 17.01.2007ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

ಪಿ.ಆರ್. 1359

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಶ್ರೀ ಟಿ.ಜಿ.ನರಸಿಂಹಮೂರ್ತಿ, ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಇವರಿಗೆ 20 ವರ್ಷಗಳಿಗೆ ನೀಡುವ ವೇತನ ಬಡ್ತಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ ಎಫ್‌ಡಿ 13 ಎಸ್‌ಆರ್‌ಪಿ 2002, ದಿನಾಂಕ: 9.5.2002.
2) ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಗ್ಯಾಇ:ಸಿ(1):5:2005, ದಿನಾಂಕ: 27.6.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಯಾವುದೇ ಪದೋನ್ನತಿ ಇಲ್ಲದೆ 20 ವರ್ಷಗಳ ಕಾಲ ಒಂದೇ ಹುದ್ದೆಯಲ್ಲಿ ಇರುವ ಸರ್ಕಾರಿ ನೌಕರರಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ. ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 27.6.2005ರ ಪತ್ರದಲ್ಲಿ ಶ್ರೀ ಟಿ.ಜಿ.ನರಸಿಂಹಮೂರ್ತಿ, ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರು 21.7.1986 ರಿಂದ ಸತತವಾಗಿ ಸಂಪಾದಕ ಹುದ್ದೆಯಲ್ಲೇ ಕಾರ್ಯನಿರ್ವಹಿಸುತ್ತಿದ್ದು ಯಾವುದೇ ಪದೋನ್ನತಿ ಪಡೆದಿರುವುದಿಲ್ಲ ಎಂದು ವರದಿ ಮಾಡಿರುತ್ತಾರೆ. ಈ ಅಧಿಕಾರಿಯು ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದು ಇವರ ಕಾರ್ಯನಿರ್ವಹಣಾ ವರದಿಗಳು ತೃಪ್ತಿಕರವಾಗಿದ್ದು ಮೇಲೆ (1) ರಲ್ಲಿ ಓದಲಾದ ದಿನಾಂಕ: 9.5.2002ರ ಆದೇಶದಲ್ಲಿನ ನಿಬಂಧನೆಗಳನ್ನು ಪೂರೈಸಿರುವುದರಿಂದ ಇವರು ಸಂಪಾದಕ ಹುದ್ದೆಯಲ್ಲಿ 20 ವರ್ಷಗಳು ಪೂರೈಸಿದ 21.7.2006 ರಿಂದ ಇವರಿಗೆ ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಶ್ರೀ ಟಿ.ಜಿ.ನರಸಿಂಹಮೂರ್ತಿ ರವರು 20 ವರ್ಷಗಳ ಸೇವೆ ಪೂರೈಸಿದ ದಿನಾಂಕಕ್ಕೆ ರೂ. 7400–13200 ವೇತನ ಶ್ರೇಣಿ

ಪಡೆಯುತ್ತಿದ್ದರು. ಆದರೆ ದಿನಾಂಕ: 9.5.2002ರ ಆದೇಶದ ಪ್ರಕಾರ ಮೊದಲ 11 ವೇತನ ಶ್ರೇಣಿಗಳಿಗೆ ಮಾತ್ರ 20 ವರ್ಷಗಳ ವೇತನ ಬಡ್ತಿ ನೀಡಲು ಅವಕಾಶವಿದೆ. ಹಾಗೂ 11ನೇ ವೇತನ ಶ್ರೇಣಿಯು 6000–11200 ಆಗಿರುತ್ತದೆ. ಈ ಪರಿಸ್ಥಿತಿಯಲ್ಲಿ ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಲಾಗಿ ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಎಫ್‌ಡಿ 819 ಇಎಕ್ಸ್‌ಪಿ–5/2006 ದಿನಾಂಕ: 6.6.2006 ರಲ್ಲಿ ಕರ್ನಾಟಕ ಗ್ಯಾಸೆಟಿಯರ್‌ನ ಸಂಪಾದಕರ ಹುದ್ದೆಯು 6000–11200ರ ವೇತನ ಶ್ರೇಣಿಯಲ್ಲಿ ಬರುವುದರಿಂದ ಶ್ರೀ ಟಿ.ಜಿ.ನರಸಿಂಹಮೂರ್ತಿ ಅವರು ರೂ.7400–13200ರ ವೇತನ ಶ್ರೇಣಿಯಲ್ಲಿದ್ದರೂ ಸಹ ದಿನಾಂಕ: 9.5.2002ರ ಆದೇಶದಂತೆ ಅವರಿಗೆ ಹೆಚ್ಚುವರಿ ವೇತನ ಬಡ್ತಿ ಮಂಜೂರು ಮಾಡುವುದನ್ನು ಪರಿಗಣಿಸಬಹುದೆಂದು ಅಭಿಪ್ರಾಯ ನೀಡಿದೆ. ಅದರಂತೆ ಪ್ರಕರಣವನ್ನು ಪರಿಗಣಿಸಿದ ನಂತರ ಈ ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 25 ಕರಾಗೆ 2006, ಬೆಂಗಳೂರು, ದಿನಾಂಕ: 23ನೇ ಜುಲೈ 2007**

ಶ್ರೀ ಟಿ.ಜಿ.ನರಸಿಂಹಮೂರ್ತಿ, ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರು ಅದೇ ಹುದ್ದೆಯಲ್ಲಿ 20 ವರ್ಷಗಳನ್ನು ಪೂರೈಸಿದ ದಿನಾಂಕ: 21.7.2006 ರಿಂದ ಜಾರಿಗೆ ಬರುವಂತೆ ಅವರಿಗೆ ವೇತನ ಶ್ರೇಣಿ ರೂ.7400–200–8800–260–10880–320–13120 ರಲ್ಲಿ (ಪರಿಷ್ಕೃತ ವೇತನ ಶ್ರೇಣಿ ರೂ.14050–25650) ಒಂದು ವೇತನ ಬಡ್ತಿಯನ್ನು ಮಂಜೂರು ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಎಫ್‌ಡಿ 819 ವೆಚ್ಚ–5/2006, ದಿನಾಂಕ: 6.6.2006 ರಲ್ಲಿ ನೀಡಿದ ಅಭಿಪ್ರಾಯದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

ಪಿ.ಆರ್. 1360

**ಶಿಕ್ಷಣ ಸಚಿವಾಲಯ**

**ವಿಷಯ:** 2007–08ನೇ ಸಾಲಿನಲ್ಲಿ ರಾಮನಗರದಲ್ಲಿ ಪ್ರಾರಂಭಿಸಲಾಗಿರುವ ನೂತನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಕಟ್ಟಡದ ನಿರ್ಮಾಣ ಕಾಮಗಾರಿಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಇಡಿ 175 ಯೋಯೋಕ 2007, ದಿನಾಂಕ: 01.06.2007.
2) ಸರ್ಕಾರದ ಆದೇಶ ಸಂಖ್ಯೆ: ಇಡಿ 189 ಯೋಸಕ 2007, ದಿನಾಂಕ: 08.06.2007.
3) ಸರ್ಕಾರದ ಆದೇಶ ಸಂಖ್ಯೆ: ಇಡಿ 83 ಟಿಇಸಿ 2007, ದಿನಾಂಕ: 28.06.2007.
4) ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಡಿ.ಟಿ.ಇ 71 ಬಿಎಲ್‌ಡಿ 2006, ದಿನಾಂಕ: 27.04.2007.

**ಪ್ರಸ್ತಾವನೆ:**

(1) ಮೇಲೆ ಓದಲಾದ (1) ಮತ್ತು (2)ರ ಸರ್ಕಾರದ ಆದೇಶಗಳಲ್ಲಿ ಕ್ರಮವಾಗಿ 2007–08ನೇ ಸಾಲಿನಲ್ಲಿ ಕೆ.ಆರ್.ಪೇಟೆ, ಹಾಸನ ಮತ್ತು ಚಾಮರಾಜನಗರಗಳಲ್ಲಿ ನೂತನವಾಗಿ ಪ್ರಾರಂಭಿಸಲಾದ ಇಂಜಿನಿಯರಿಂಗ್ ಕಾಲೇಜುಗಳಿಗೆ ಹಾಗೂ ಬೆಂಗಳೂರಿನ ಎಸ್.ಕೆ.ಎಸ್.ಜೆ.ಟಿ.ಯ ಕಟ್ಟಡಗಳ ನಿರ್ಮಾಣದ ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ರಾಮನಗರದಲ್ಲಿ ನೂತನ ಇಂಜಿನಿಯರಿಂಗ್ ಕಾಲೇಜನ್ನು 2007–08ನೇ ಸಾಲಿಗೆ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (4)ರ ಪತ್ರದಲ್ಲಿ ರಾಮನಗರದಲ್ಲಿ ನೂತನವಾಗಿ ಪ್ರಾರಂಭಿಸಲಾದ ಇಂಜಿನಿಯರಿಂಗ್ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಯ 30.00 ಕೋಟಿ ರೂ.ಗಳ (ಮೂವತ್ತು ಕೋಟಿಗಳು ಮಾತ್ರ) ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 175 ಯೋಯೋಕ 2007, ಬೆಂಗಳೂರು, ದಿನಾಂಕ: 13ನೇ ಜುಲೈ 2007**
**[ಇಡಿ 105 ಸ್ವೀಮರ(ಯುನಿಕ್) 2007, ದಿನಾಂಕ: 13.07.2007]**

(3) 2007–08ನೇ ಸಾಲಿಗೆ ರಾಮನಗರದಲ್ಲಿ ಪ್ರಾರಂಭಿಸಲಾದ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿಗೆ ಕಟ್ಟಡ ನಿರ್ಮಾಣ ಕಾಮಗಾರಿಗೆ ಸಂಬಂಧಿಸಿದಂತೆ 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202–02–104–1–03–386 ರಡಿ ಒದಗಿಸಿರುವ ಅನುದಾನದಲ್ಲಿ 30.00 ಕೋಟಿ ರೂ.ಗಳ (ಮೂವತ್ತು ಕೋಟಿ ರೂಪಾಯಿಗಳು ಮಾತ್ರ) ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

(4) 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202–02–104–1–03–386 (ಯೋಜನೆ) ಯಡಿಯಲ್ಲಿ 50.00 ಕೋಟಿ ರೂ.ಗಳನ್ನು ಒದಗಿಸಿದ್ದು, ಅದರ ಮಿತಿಯೊಳಗೆ ಸದರಿ ಕಾಲೇಜುಗಳ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

(5) ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

(6) ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಲೋಇ 246 ಆಕೋ–3/2007, ದಿನಾಂಕ: 17.05.2007 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1361 ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ).

**ವಿಷಯ:** ಹಾವೇರಿ ಪಟ್ಟಣದಲ್ಲಿ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆ ಬಗ್ಗೆ – ಮಂಜೂರಾತಿ.

**ಪ್ರಸ್ತಾವನೆ:**

2007–08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರು ಈ ಕೆಳಗಿನಂತೆ ಘೋಷಿಸಿರುತ್ತಾರೆ.

"ಇಂಜಿನಿಯರಿಂಗ್ ಕಾಲೇಜುಗಳಿಗೆ ಏರುತ್ತಿರುವ ಬೇಡಿಕೆಯನ್ನು ಗಮನದಲ್ಲಿಟ್ಟುಕೊಂಡು ಕುಶಾಲನಗರ, ರಾಯಚೂರು, ಚಾಮರಾಜನಗರ ಮತ್ತು ಬಳ್ಳಾರಿಗಳಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಇಂಜಿನಿಯರಿಂಗ್ ಕಾಲೇಜುಗಳಾಗಿ ಮೇಲ್ದರ್ಜೆಗೇರಿಸಲು ಉದ್ದೇಶಿಸಿದ್ದೇನೆ. ಇದರ ಜೊತೆಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ತನ್ನ ಸಂಯೋಜಿತ ಇಂಜಿನಿಯರಿಂಗ್ ಕಾಲೇಜನ್ನು ಹಾಸನದಲ್ಲಿ ಆರಂಭಿಸಲಿದೆ. ಈ ಎಲ್ಲಾ ಉದ್ದೇಶಗಳಿಗಾಗಿ 2007–08ನೇ ಸಾಲಿನಲ್ಲಿ 50 ಕೋಟಿ ರೂ.ಗಳನ್ನು ಮೀಸಲಿಡುತ್ತಿದ್ದೇನೆ."

ಈ ಉದ್ದೇಶಕ್ಕಾಗಿ 2007–08ನೇ ಸಾಲಿನ ಆಯವ್ಯಯದಲ್ಲಿ ಆಯವ್ಯಯ ಲೆಕ್ಕ ಶೀರ್ಷಿಕೆ 4202–02–104–01–13–386 ಅಡಿಯಲ್ಲಿ ಇಂಜಿನಿಯರಿಂಗ್ ಕಾಲೇಜುಗಳ ನಿರ್ಮಾಣಕ್ಕಾಗಿ ರೂ.5000.00 ಲಕ್ಷಗಳನ್ನು ಒದಗಿಸಲಾಗಿದೆ.

ಸರ್ಕಾರವು ಈ ಬಗ್ಗೆ ಚರ್ಚಿಸಿ ಸದ್ಯದಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಹಾಗೆಯೇ ಉಳಿಸಿಕೊಂಡು ಮೇಲ್ಕಂಡ ಸ್ಥಳಗಳಲ್ಲಿ ಹೊಸದಾಗಿ ಇಂಜಿನಿಯರಿಂಗ್ ಕಾಲೇಜುಗಳನ್ನು ಪ್ರಾರಂಭಿಸಲು ನಿರ್ಣಯಿಸಲಾಗಿರುತ್ತದೆ.

ಅಲ್ಲದೆ ಹಾವೇರಿ ಪಟ್ಟಣದಲ್ಲಿಯೂ ಸಹ ಸರ್ಕಾರದ ವತಿಯಿಂದಲೇ ಒಂದು ಇಂಜಿನಿಯರಿಂಗ್ ಕಾಲೇಜನ್ನು ಪ್ರಾರಂಭಿಸಲು ನಿರ್ಧರಿಸಲಾಗಿದೆ.

ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 60 ಟಿಇಸಿ 2000(2), ಬೆಂಗಳೂರು, ದಿನಾಂಕ: 12ನೇ ಜುಲೈ 2007**

ಹಾವೇರಿ ಪಟ್ಟಣದಲ್ಲಿ ಎಐಸಿಟಿಇ ಅನುಮೋದನೆಯನ್ನು ಕಾಯ್ದಿರಿಸಿ ಹೊಸ ಇಂಜಿನಿಯರಿಂಗ್ ಕಾಲೇಜನ್ನು 2007–08ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಸ್ಥಾಪನೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಕಾಲೇಜಿಗೆ ಅಗತ್ಯವಿರುವ ಸಿಬ್ಬಂದಿ ವಿವರಗಳು ಹಾಗೂ ಕಟ್ಟಡ ನಿರ್ಮಾಣ ಕುರಿತಂತೆ ಆಯವ್ಯಯ ನಿಗದಿಗೊಳಿಸಿ ಪ್ರತ್ಯೇಕವಾಗಿ ಆದೇಶವನ್ನು ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 246 ಆಕೋ–3/2007 ದಿನಾಂಕ: 17.5.2007 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1362 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ವಿಷಯ:** ರಾಯಚೂರು ಜಿಲ್ಲೆಯಲ್ಲಿ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆ ಬಗ್ಗೆ – ಮಂಜೂರಾತಿ.

**ಪ್ರಸ್ತಾವನೆ:**

2007–08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರು ಈ ಕೆಳಗಿನಂತೆ ಘೋಷಿಸಿರುತ್ತಾರೆ.

"ಇಂಜಿನಿಯರಿಂಗ್ ಕಾಲೇಜುಗಳಿಗೆ ಏರುತ್ತಿರುವ ಬೇಡಿಕೆಯನ್ನು ಗಮನದಲ್ಲಿಟ್ಟುಕೊಂಡು ಕುಶಾಲನಗರ, ರಾಯಚೂರು, ಚಾಮರಾಜನಗರ ಮತ್ತು ಬಳ್ಳಾರಿಗಳಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಇಂಜಿನಿಯರಿಂಗ್ ಕಾಲೇಜುಗಳಾಗಿ ಮೇಲ್ದರ್ಜೆಗೇರಿಸಲು ಉದ್ದೇಶಿಸಿದ್ದೇನೆ. ಇದರ ಜೊತೆಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ತನ್ನ

ಸಂಯೋಜಿತ ಇಂಜಿನಿಯರಿಂಗ್ ಕಾಲೇಜನ್ನು ಹಾಸನದಲ್ಲಿ ಆರಂಭಿಸಲಿದೆ. ಈ ಎಲ್ಲಾ ಉದ್ದೇಶಗಳಿಗಾಗಿ 2007–08ನೇ ಸಾಲಿನಲ್ಲಿ 50 ಕೋಟಿ ರೂ.ಗಳನ್ನು ಮೀಸಲಿಡುತ್ತಿದ್ದೇನೆ."

ಈ ಉದ್ದೇಶಕ್ಕಾಗಿ 2007–08ನೇ ಸಾಲಿನ ಆಯವ್ಯಯದಲ್ಲಿ ಆಯವ್ಯಯ ಲೆಕ್ಕ ಶೀರ್ಷಿಕೆ 4202–02–104–01–13–386 ಅಡಿಯಲ್ಲಿ ಇಂಜಿನಿಯರಿಂಗ್ ಕಾಲೇಜುಗಳ ನಿರ್ಮಾಣಕ್ಕಾಗಿ ರೂ.5000.00 ಲಕ್ಷಗಳನ್ನು ಒದಗಿಸಲಾಗಿದೆ.

ಸರ್ಕಾರವು ಈ ಬಗ್ಗೆ ಚರ್ಚಿಸಿ ಸದ್ಯದಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಹಾಗೆಯೇ ಉಳಿಸಿಕೊಂಡು ಮೇಲ್ಕಂಡ ಸ್ಥಳಗಳಲ್ಲಿ ಹೊಸದಾಗಿ ಇಂಜಿನಿಯರಿಂಗ್ ಕಾಲೇಜುಗಳನ್ನು ಪ್ರಾರಂಭಿಸಲು ನಿರ್ಣಯಿಸಲಾಗಿರುತ್ತದೆ.

ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 60 ಟಿಇಸಿ 2000(1), ಬೆಂಗಳೂರು, ದಿನಾಂಕ: 12ನೇ ಜುಲೈ 2007**

ರಾಯಚೂರು ಜಿಲ್ಲೆಯಲ್ಲಿ ಎಐಸಿಟಿಇ ಅನುಮೋದನೆಯನ್ನು ಕಾಯ್ದಿರಿಸಿ ಹೊಸ ಇಂಜಿನಿಯರಿಂಗ್ ಕಾಲೇಜನ್ನು 2007–08ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಸ್ಥಾಪನೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಕಾಲೇಜಿಗೆ ಅಗತ್ಯವಿರುವ ಸಿಬ್ಬಂದಿ ವಿವರಗಳು ಹಾಗೂ ಕಟ್ಟಡ ನಿರ್ಮಾಣ ಕುರಿತಂತೆ ಆಯವ್ಯಯ ನಿಗದಿಗೊಳಿಸಿ ಪ್ರತ್ಯೇಕವಾಗಿ ಆದೇಶವನ್ನು ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 246 ಆಕೋ–3/2007 ದಿನಾಂಕ: 17.5.2007 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1363 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ವಿಷಯ:** ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿಯಲ್ಲಿ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆ ಬಗ್ಗೆ – ಮಂಜೂರಾತಿ.

**ಪ್ರಸ್ತಾವನೆ:**

2007–08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರು ಈ ಕೆಳಗಿನಂತೆ ಘೋಷಿಸಿರುತ್ತಾರೆ.

"ಇಂಜಿನಿಯರಿಂಗ್ ಕಾಲೇಜುಗಳಿಗೆ ಏರುತ್ತಿರುವ ಬೇಡಿಕೆಯನ್ನು ಗಮನದಲ್ಲಿಟ್ಟುಕೊಂಡು ಕುಶಾಲನಗರ, ರಾಯಚೂರು, ಚಾಮರಾಜನಗರ ಮತ್ತು ಬಳ್ಳಾರಿಗಳಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಇಂಜಿನಿಯರಿಂಗ್ ಕಾಲೇಜುಗಳಾಗಿ ಮೇಲ್ದರ್ಜೆಗೇರಿಸಲು ಉದ್ದೇಶಿಸಿದ್ದೇನೆ. ಇದರ ಜೊತೆಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ತನ್ನ ಸಂಯೋಜಿತ ಇಂಜಿನಿಯರಿಂಗ್ ಕಾಲೇಜನ್ನು ಹಾಸನದಲ್ಲಿ ಆರಂಭಿಸಲಿದೆ. ಈ ಎಲ್ಲಾ ಉದ್ದೇಶಗಳಿಗಾಗಿ 2007–08ನೇ ಸಾಲಿನಲ್ಲಿ 50 ಕೋಟಿ ರೂ.ಗಳನ್ನು ಮೀಸಲಿಡುತ್ತಿದ್ದೇನೆ."

ಈ ಉದ್ದೇಶಕ್ಕಾಗಿ 2007–08ನೇ ಸಾಲಿನ ಆಯವ್ಯಯದಲ್ಲಿ ಆಯವ್ಯಯ ಲೆಕ್ಕ ಶೀರ್ಷಿಕೆ 4202–02–104–01–13–386 ಅಡಿಯಲ್ಲಿ ಇಂಜಿನಿಯರಿಂಗ್ ಕಾಲೇಜುಗಳ ನಿರ್ಮಾಣಕ್ಕಾಗಿ ರೂ.5000.00 ಲಕ್ಷಗಳನ್ನು ಒದಗಿಸಲಾಗಿದೆ.

ಸರ್ಕಾರವು ಈ ಬಗ್ಗೆ ಚರ್ಚಿಸಿ ಸದ್ಯದಲ್ಲಿರುವ ಪಾಲಿಟೆಕ್ನಿಕ್‌ಗಳನ್ನು ಹಾಗೆಯೇ ಉಳಿಸಿಕೊಂಡು ಮೇಲ್ಕಂಡ ಸ್ಥಳಗಳಲ್ಲಿ ಹೊಸದಾಗಿ ಇಂಜಿನಿಯರಿಂಗ್ ಕಾಲೇಜುಗಳನ್ನು ಪ್ರಾರಂಭಿಸಲು ನಿರ್ಣಯಿಸಲಾಗಿರುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ಸ್ಥಾಪಿಸಲು ಉದ್ದೇಶಿಸಲಾಗಿದ್ದ ಹೊಸ ಇಂಜಿನಿಯರಿಂಗ್ ಕಾಲೇಜಿನ ಬಗ್ಗೆ ಸರ್ಕಾರವು ಪುನರ್ ಪರಿಶೀಲಿಸಿ ಸದರಿ ಇಂಜಿನಿಯರಿಂಗ್ ಕಾಲೇಜನ್ನು ಅದೇ ಜಿಲ್ಲೆಯ ಹೂವಿನಹಡಗಲಿಯಲ್ಲಿ ಪ್ರಾರಂಭಿಸಲು ನಿರ್ಧರಿಸಲಾಗಿದೆ.

ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 60 ಟಿಇಸಿ 2007, ಬೆಂಗಳೂರು, ದಿನಾಂಕ: 12ನೇ ಜುಲೈ 2007**

ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿಯಲ್ಲಿ ಎಐಸಿಟಿಇ ಅನುಮೋದನೆಯನ್ನು ಕಾಯ್ದಿರಿಸಿ ಹೊಸ ಇಂಜಿನಿಯರಿಂಗ್ ಕಾಲೇಜನ್ನು 2007–08ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಸ್ಥಾಪನೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಕಾಲೇಜಿಗೆ ಅಗತ್ಯವಿರುವ ಸಿಬ್ಬಂದಿ ವಿವರಗಳು ಹಾಗೂ ಕಟ್ಟಡ ನಿರ್ಮಾಣ ಕುರಿತಂತೆ ಆಯವ್ಯಯ ನಿಗದಿಗೊಳಿಸಿ ಪ್ರತ್ಯೇಕವಾಗಿ ಆದೇಶವನ್ನು ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 246 ಆಕೋ–3/2007 ದಿನಾಂಕ: 17.5.2007 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1364 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ENERGY SECRETARIAT**

**Subject:** Enhancement of Capacity of Durgahole Mini Hydel Power Project allotted to M/s GVP Infra Projects Private Limited from 4.00 MW to 10.00 MW-reg.

**Read:**
1) Government Order No: EN 439 NCE 2006 dated: 13.3.2007.
2) Government Order No: EN 439 NCE 2006 dated: 1.6.2007.
3) Letter No: KRED/06/Durgahole/2007/1486 dated: 29.6.2007 received from the Managing Director, Karnataka Renewable Energy Development Limited, Bangalore.

**PREAMBLE:**

In the Government order read at (1) above sanction has been accorded to implement 4.00 MW capacity Durgahole Mini Hydel Power Project across Durgahole near Durga village, Karkala Taluk, Udupi District in favour of M/s K. Ganga Prasad.

In the Government order read at (2) above approval has been accorded for the change of company's name from M/s K. Ganga Prasad to M/s GVP Infra Projects Private Limited to implement 4.00 MW capacity across Durgahole Mini Hydel Power Project across Durgahole near Durga village, Karkala Taluk, Udupi District.

In the letter read at (3) above, the Managing Director, Karnataka Renewable Energy Development Limited, Bangalore, has recommended to Government to enhance the capacity from 4.00 MW to 10.00 MW Durgahole Mini Hydel Power Project across Durgahole near Durga village, Karkala Taluk, Udupi District in favour of M/s GVP Infra Projects Private Limited.

The proposal has been examined at the Government level and hence the order :-

**Government Order No: EN 254 NCE 2007, Bangalore, Dated: 17th July 2007**

Government accords approval for enhancement of the capacity of Durgahole Mini Hydel Power Project from 4.00 MW to 10.00 MW across Durgahole near Durga village, Karkala Taluk, Udupi District in favour of M/s GVP Infra Projects Private Limited.

The terms and conditions laid down in Government Order read at (1) above shall **IPSO FACTO** applicable.

By Order and in the name of the Governor of Karnataka,

P.R. 1321 **SURESH.B.KRISHNAPPANAVAR**

Under Secretary to Government, Energy Department.

**Subject:** Enhancement of Capacity of Tallaru Mini Hydel Power Project allotted to M/s TCI Constructions from 4.00 MW to 12.00 MW and accord permission for change of company's name to M/s Jyoti Green Energy Private Limited-reg.

**Read:**
1) Government Order No: EN 290 NCE 2006 dated: 16.10.2006.
2) Letter No: KRED/06/Tallaru/2007/1487 dated: 29.6.2007 received from the Managing Director, Karnataka Renewable Energy Development Limited, Bangalore.

**PREAMBLE :**

In the Government order read at (1) above sanction has been accorded to implement 4.00 MW capacity Tallaru Mini Hydel Power Project across Swarna river near Tallaru village, Karkala Taluk, Udupi District in favour of M/s TCI Constructions.

In the letter read at (2) above, the Managing Director, Karnataka Renewable Energy Development Limited, Bangalore, has recommended to Government to enhance the capacity from 4.00 MW to 12.00 MW Tallaru Mini Hydel Power Project across Swarna river near Tallaru village, Karkala Taluk, Udupi District and further recommended for the change of company's name from M/s TCI Constructions to M/s Jyoti Green Energy Private Limited to implement Tallaru Mini Hydel Power Project.

The proposal has been examined at the Government level and hence the order :-

**Government Order No: EN 255 NCE 2007, Bangalore, Dated: 17th July 2007**

Government accords approval for change of company's name from M/s TCI Constructions to M/s Jyoti Green Energy Private Limited and enhancement of the capacity of Tallaru Mini Hydel

